<u>ಕರ್ನಾಟಕ ವಿಧಾನ ಪರಿಷತ್ತು</u>

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಶ್ರೀ ಎಸ್.ಎಲ್ ಬೋಜೇಗೌಡ
ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1830
ಉತ್ತರಿಸಬೇಕಾದ ದಿನಾಂಕ : 24.03.2020

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ರೈತರಿಗಾಗಿ ಇರುವ ವಿವಿಧ ಸಾಲ ಯೋಜನೆಗಳು ಯಾವುವು: (ಈ ಸಾಲ ಯೋಜನೆಯ ನಿಯಮಗಳ ಸಂಪೂರ್ಣ ಮಾಹಿತಿ ನೀಡುವುದು) | ರಾಜ್ಯದ ರೈತರಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕುಗಳು ಮತ್ತು ಪಿಕಾರ್ಡ್ ಬ್ಯಾಂಕುಗಳ ಮೂಲಕ ಸರ್ಕಾರದಿಂದ ಬಡ್ಡಿ ಸಹಾಯಧನ ನೀಡುವ ಮೂಲಕ ರೈತರಿಗೆ ಇರುವ ಯೋಜನೆಗಳು ಈ ಕೆಳಗಿನಂತಿವೆ.<br><br>1. <u>**ಶೂನ್ಯ ಬಡ್ಡಿ ದರದಲ್ಲಿ ಬೆಳೆ ಸಾಲ ನೀಡುವ ಯೋಜನೆ**</u> – ರೂ.3 ಲಕ್ಷಗಳ ವರೆಗಿನ ಬೆಳೆ ಸಾಲವನ್ನು ಶೂನ್ಯ ಬಡ್ಡಿ ದರ ಅನ್ವಯವಾಗುವಂತೆ ನೀಡುವ ಯೋಜನೆ ಇರುತ್ತದೆ.<br>2. <u>**ಶೇ. 3 ರ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ನೀಡುವ ಯೋಜನೆ**</u> – ರೂ.10 ಲಕ್ಷಗಳ ವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲವನ್ನು ಶೇ..3 ರ ಬಡ್ಡಿ ದರ ಅನ್ವಯವಾಗುವಂತೆ ರೈತರಿಗೆ ನೀಡುವ ಯೋಜನೆ ಇರುತ್ತದೆ.<br>3. <u>**ಗೃಹ ಲಕ್ಷ್ಮಿ ಯೋಜನೆ**</u> – ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಬಂಗಾರವನ್ನು ಅಡವಿಟ್ಟುಕೊಂಡು ರೂ.2.00 ಲಕ್ಷಗಳ ವರೆಗಿನ ಬೆಳೆ ಸಾಲವನ್ನು ಶೇ.3 ರ ಬಡ್ಡಿ ದರದಲ್ಲಿ ವಿತರಿಸುವ ಯೋಜನೆ ಇರುತ್ತದೆ.<br><br>ಸಹಕಾರ ಬ್ಯಾಂಕುಗಳು ಸರ್ಕಾರದ ಸಹಾಯಧನ ಇಲ್ಲದೇ ಈ ಕೆಳಕಂಡ ಸಾಮಾನ್ಯ ಕೃಷಿಯೇತರ ಸಾಲಗಳನ್ನು ವಿತರಿಸುತ್ತಿವೆ. ಈ ಯೋಜನೆಗಳಿಗೆ ಬ್ಯಾಂಕುಗಳು ತಮ್ಮ ಹಂತದಲ್ಲಿ ಸಾಲದ ನಿಯಮಾವಳಿಗಳನ್ನು ರೂಪಿಸಿಕೊಂಡಿರುತ್ತವೆ.<br><br>1. ವಾಹನ ಸಾಲ<br>2. ಗೃಹ ನಿರ್ಮಾಣ ಸಾಲ<br>3. ಬಂಗಾರದ ಸಾಲ<br>4. ಕೃಷಿ ಉತ್ಪನ್ನಗಳನ್ನು ಅಡವಿಟ್ಟುಕೊಂಡು ಅಡಮಾನ ಸಾಲ ಇನ್ನೂ ಮುಂತಾದವು |
| ಆ) | ಈ ಯೋಜನೆಗಳಲ್ಲಿ ಸಹಾಯಧನ (ಸಬ್ಸಿಡಿ) ಹೊಂದಿರುವ ಯೋಜನೆಗಳು ಯಾವುವು: (ಈ ಯೋಜನೆಗಳ ರೂಪುರೇಷೆಗಳ ಮಾಹಿತಿ ನೀಡುವುದು) | ಸಹಾಯಧನ (ಸಬ್ಸಿಡಿ) ಹೊಂದಿರುವ ಯೋಜನೆಗಳು ಈ ಕೆಳಗಿನಂತಿರುತ್ತವೆ.<br>1. <u>**ಶೂನ್ಯ ಬಡ್ಡಿ ದರದಲ್ಲಿ ಬೆಳೆ ಸಾಲ ನೀಡುವ ಯೋಜನೆ**</u> – ರೂ.3 ಲಕ್ಷಗಳ ವರೆಗಿನ ಬೆಳೆ ಸಾಲವನ್ನು ಶೂನ್ಯ ಬಡ್ಡಿ ದರ ಅನ್ವಯವಾಗುವಂತೆ ವಿತರಿಸಲಾಗುತ್ತಿದೆ.<br>ರೈತರು ಸಹಕಾರ ಸಂಘದಲ್ಲಿ ಸದಸ್ಯತ್ವ ಪಡೆದು ಭೂಮಿ ಹೊಂದಿರಬಬೇಕು. ನಿಗದಿತ ಅರ್ಜಿ ನಮೂನೆಯಲ್ಲಿ ರೈತನು ಬೆಳೆಯುವ ಬೆಳೆಯ ವಿವರವನ್ನು ಸಲ್ಲಿಸಬೇಕು. ಮರುಪಾವತಿಗೆ ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲನ್ನು ಮರುಪಾವತಿಸಬೇಕು.<br>2. <u>**ಶೇ. 3 ರ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲ ನೀಡುವ ಯೋಜನೆ**</u> – ರೂ.10 ಲಕ್ಷಗಳ ವರೆಗಿನ ಮಧ್ಯಮಾವಧಿ ಮತ್ತು ದೀರ್ಘಾವಧಿ ಕೃಷಿ ಸಾಲವನ್ನು ಶೇ..3 ರ ಬಡ್ಡಿ ದರ ಅನ್ವಯವಾಗುವಂತೆ ರೈತರಿಗೆ ನೀಡುವ ಯೋಜನೆ ಇರುತ್ತದೆ. |

| | | |
|---|---|---|
| | | ಈ ಯೋಜನೆಯಲ್ಲಿ ಟ್ರಾಕ್ಟರ್, ಪವರ್ ಟಿಲ್ಲರ್ ಮುಂತಾದ ಕೃಷಿಯಂತ್ರೋಪಕರಣಗಳನ್ನು ಒಳಗೊಂಡಂತೆ ನಬಾರ್ಡ್ ಗುರುತಿಸಿದ ಕೃಷಿ ಮತ್ತು ಪೂರಕ ಉದ್ದೇಶಗಳಿಗೆ ಸಾಲ ನೀಡಲಾಗುತ್ತಿದೆ.<br><br>ರೈತರು ಸಹಕಾರ ಸಂಘದಲ್ಲಿ ಸದಸ್ಯತ್ವ ಪಡೆದು ಭೂಮಿ ಹೊಂದಿರಬೇಕು. ನಿಗದಿತ ಅರ್ಜಿ ನಮೂನೆಯೊಂದಿಗೆ ಯೋಜನಾ ವರದಿ, ಕೋಟೇಷನ್ ಗಳು, ವಿವಿಧ ಇಲಾಖೆಯ ಅನುಮತಿ ಪತ್ರ ಮುಂತಾದ ವಿವರ / ದಾಖಲೆಗಳೊಂದಿಗೆ ಸಹಕಾರ ಸಂಘಗಳಿಗೆ ಅರ್ಜಿ ಸಲ್ಲಿಸಬೇಕು. ಮರುಪಾವತಿಗೆ ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮತ್ತು ಶೇ.3 ರ ಬಡ್ಡಿಯನ್ನು ಮರುಪಾವತಿಸಬೇಕು.<br><br>3. **ಗೃಹ ಲಕ್ಷ್ಮಿ ಯೋಜನೆ** – ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಬಂಗಾರವನ್ನು ಅಡವಿಟ್ಟುಕೊಂಡು ರೂ.2.00 ಲಕ್ಷಗಳ ವರೆಗಿನ ಬೆಳೆ ಸಾಲವನ್ನು ಶೇ.3 ರ ಬಡ್ಡಿ ದರದಲ್ಲಿ ವಿತರಿಸುವ ಯೋಜನೆ ಇರುತ್ತದೆ.<br><br>ರೈತರು ಸಹಕಾರ ಸಂಘದಲ್ಲಿ ಸದಸ್ಯತ್ವ ಪಡೆದು ಭೂಮಿ ಹೊಂದಿರಬೇಕು. ನಿಗದಿತ ಅರ್ಜಿ ನಮೂನೆಯಲ್ಲಿ ರೈತನು ಬೆಳೆಯುವ ಬೆಳೆಯ ವಿವರವನ್ನು ಸಲ್ಲಿಸಬೇಕು. ಮರುಪಾವತಿಗೆ ನಿಗದಿಪಡಿಸಿದ ಗಡುವಿನ ದಿನಾಂಕದೊಳಗೆ ಅಸಲು ಮತ್ತು ಶೇ.3 ರ ಬಡ್ಡಿಯನ್ನು ಮರುಪಾವತಿಸಬೇಕು. |
| ಇ) | ಈ ಸಾಲ ಯೋಜನೆಯ ಲಾಭ ಪಡೆಯಲು ರೈತರು ಅನುಸರಿಸಬೇಕಾಗಿರುವ ನಿಯಮಗಳೇನು: (ಸಂಪೂರ್ಣ ಮಾಹಿತಿ ನೀಡುವುದು) | ಬೆಳೆ ಸಾಲ ಪಡೆಯಲು ರೈತರು ಭೂಮಿ ಹೊಂದಿರುಬೇಕು ಹಾಗೂ ಸಹಕಾರ ಸಂಘದಲ್ಲಿ ಸದಸ್ಯತ್ವ ಪಡೆದು ನಿಗದಿತ ಅರ್ಜಿ ನಮೂನೆಯಲ್ಲಿ ರೈತರು ಬೆಳೆಯುವ ಬೆಳೆಯ ವಿವರವನ್ನು ಸಲ್ಲಿಸಬೇಕು. |
| ಈ) | ರೈತರಿಗಾಗಿ ವಾಹನ ಸಾಲ ಯೋಜನೆ ಜಾರಿಯಲ್ಲಿದೆಯೇ: | ರೈತರಿಗೆ ಸರ್ಕಾರದ ಬಡ್ಡಿ ಸಹಾಯಧನ ನೀಡದೇ ಸಾಮಾನ್ಯ ಬಡ್ಡಿ ದರದಲ್ಲಿ ಪಿಕಾರ್ಡ್ ಬ್ಯಾಂಕುಗಳಿಂದ ಮತ್ತು ಡಿಸಿಸಿ ಬ್ಯಾಂಕುಗಳಿಂದ ವಾಹನ ಸಾಲಗಳನ್ನು ನೀಡಲಾಗುತ್ತಿದೆ. |
| ಉ) | ಹಾಗಿದ್ದಲ್ಲಿ, ಯಾವ ಯಾವ ವಾಹನಗಳಿಗೆ ಸಾಲ ನೀಡಲಾಗುತ್ತಿದೆ: ವಾಹನ ಸಾಲ ಯೋಜನೆಯಲ್ಲಿ ಸಬ್ಸಿಡಿ ನೀಡಲಾಗುತ್ತಿದೆಯೇ? | ನಬಾರ್ಡ್ ನಿಯಮಾವಳಿಗಳನ್ವಯ ದ್ವಿಚಕ್ರ ವಾಹನ ಮತ್ತು ಪಿಕ್‌ಅಪ್ ವಾಹನಗಳಿಗೆ ಸಾಲ ನೀಡಲಾಗುತ್ತಿದೆ. ಆದರೆ ಈ ಸಾಲಗಳಿಗೆ ಸರ್ಕಾರದಿಂದ ಸಹಾಯಧನ ನೀಡಲಾಗುವುದಿಲ್ಲ. |

**ಸಂಖ್ಯೆ : ಸಿಒ 157 ಸಿಎಲ್‌ಎಸ್ 2020**

(ಎಸ್.ಟಿ ಸೋಮಶೇಖರ್)

ಸಹಕಾರ ಸಚಿವರು